ಸದನದಲ್ಲಿ ಉತ್ತರಿಸುವ ಪ್ರಶ್ನೆ



ಕರ್ನಾಟಕ ವಿಧಾನ ಪರಿಷತ್ತು
ನೂರ ನಲವತ್ತಮೂರನೆಯ ಅಧಿವೇಶನ
ಬುಧವಾರ, ದಿನಾಂಕ : 03 ನೇ ಫೆಬ್ರುವರಿ, 2021

ವಿಶ್ವಕರ್ಮ ಜನಾಂಗದ ಕುರಿತು

ಶ್ರೀ ಕೆ.ಪಿ. ನಂಜುಂಡಿ ವಿಶ್ವಕರ್ಮ (ವಿಧಾನಸಭೆಯಿಂದ ಚುನಾಯಿತರಾದವರು) -

47 (325) ಮುಜರಾಯಿ ಹಾಗೂ ಹಿಂದುಳಿದ ವರ್ಗಗಳ ಕಲ್ಯಾಣ ಸಚಿವರು ಈ ವಿಷಯಗಳನ್ನು ದಯವಿಟ್ಟು ತಿಳಿಸುವರೆ-

(ಅ) ರಾಜ್ಯದಲ್ಲಿರುವ ವಿಶ್ವಕರ್ಮ ಜನಾಂಗದ ಜನ ಸಂಖ್ಯೆ ಎಷ್ಟು ; ಅದರಲ್ಲಿ ಪುರುಷರೆಷ್ಟು ; ಮಹಿಳೆಯರೆಷ್ಟು ; ಸರ್ಕಾರಿ ಉದ್ಯೋಗದಲ್ಲಿರುವವರು ಎಷ್ಟು; ಈ ಸಮುದಾಯಕ್ಕೆ ನೇಮಕಾತಿಯಲ್ಲಿ ಕಾಯ್ದಿರಿಸಿದ ಸ್ಥಾನ ಎಷ್ಟು ;

(ಆ) ಹಿಂದುಳಿದ ವರ್ಗಕ್ಕೆ ಸೇರುವ ಒಟ್ಟು ಜನ ಸಂಖ್ಯೆ ಎಷ್ಟು ; ಅದೇ ರೀತಿ ಎಸ್.ಸಿ., ಎಸ್.ಟಿ. ಸಾಮಾನ್ಯವರ್ಗದ ಶೇಕಡವಾರು ಜನಸಂಖ್ಯೆ ಪ್ರಮಾಣ ಎಷ್ಟು ;

(ಇ) ಶೇಕಡವಾರು ಪ್ರಮಾಣಕ್ಕೆ ಅನುಗುಣವಾಗಿ ನೇಮಕಾತಿಯಲ್ಲಿರುವ Reservation ಮಾಡದೇ ಇರುವುದರಿಂದ ಹಿಂದುಳಿದ ವರ್ಗದವರು ಮೀಸಲಾತಿಯಿಂದ ವಂಚಿತರಾಗಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ;

(ಈ) ಹಾಗಿದ್ದಲ್ಲಿ, ಸರ್ಕಾರದ ಕ್ರಮಗಳೇನು ?